ಗುಣಾಕಾರದ ಗುಣಗಳು

ಭಿನ್ನರಾಶಿಗಳಿಗೆ (ಮತ್ತು ಪೂರ್ಣ ಸಂಖ್ಯೆಗಳಿಗೆ) ದೃಶ್ಯ ಸಮರ್ಥನೆ

ಅನುವಾದ :ಜನಾರ್ದನ್ ಸಿಎಸ್ , ಚೈತನ್ಯಅಸೋಸಿಯೇಟ್ಸ್ , ಮೈಸೂರು

ಪೂರ್ಣ ಸಂಖ್ಯೆಗಳು ಮತ್ತು ಭಿನ್ನರಾಶಿಗಳ ಸಂಕಲನಗಳಿಗೆ ಸಚಿತ್ರ ಸಮರ್ಥನೆಗಳನ್ನು ಗಮನಿಸಿದ ನಂತರ ಅದೇ ಸಂಖ್ಯೆಗಳಿಗೆ ಈ ಪುರವಣಿಯು ಗುಣಾಕಾರದ ಗುಣಗಳನ್ನು ತೆಗೆದುಕೊಳ್ಳೋಣ.

ಮಾದರಿ: ಒಂದು ಚದರಮಾನವು ಪೂರ್ಣವನ್ನು ಪ್ರತಿನಿಧಿಸುತ್ತದೆ, ಒಂದು ಚೌಕವನ್ನು ಲಂಬವಾಗಿ 4 ಸಮಭಾಗಗಳನ್ನು ಮಾಡಿ ಅದರಲ್ಲಿ 1ಕ್ಕೆ ಛಾಯೀಕರಿಸುವ ಮೂಲಕ  ¼ ಅನ್ನು ಪ್ರತಿನಿಧಿಸಲಾಗುತ್ತದೆ ಹಾಗೆಯೇ 2 ಚೌಕಗಳನ್ನು 3 ಸಮ ಭಾಗಗಳನ್ನಾಗಿ ಮಾಡಿ 5 ಭಾಗಗಳನ್ನು ಛಾಯೀಕರಿಸುವ ಮೂಲಕ  5/3 ಯನ್ನು ಪ್ರತಿನಿಧಿಸಲಾಗುತ್ತದೆ (ಚಿತ್ರ 0 ).

< < < < < < < < < < < < < < < < < < < < < < ಚಿತ್ರ 0 ಯನ್ನು ಸೇರಿಸಬೇಕು > > > > > > > > > > > > > > > > > > > > > > > > >

ಗುಣಾಕಾರದ ಸರಣಿ ಮಾದರಿಯನ್ನು ಪರಿಗಣಿಸಿ ನೋಡಿದರೆ ಪರಿವರ್ತನೀಯತೆ ಹಾಗು ವಿಭಾಜಕತೆಯ ಗುಣಗಳು ಪೂರ್ಣ ಸಂಖ್ಯೆಗಳ ಗುಣಗಳ ಮುಂದುವರಿಕೆಯಷ್ಟೇ. ಇದರಲ್ಲಿ ಗುಣಲಬ್ಧವನ್ನು ಆಯತದ ಮೂಲಕ ತೋರಿಸಲಾಗುತ್ತದೆ. ಅದರಲ್ಲಿ ಲಂಬ ಭಾಗವು ಗುಣ್ಯವಾಗಿದ್ದು ಅಡ್ಡ ಭಾಗವು ಗುಣಕವಾಗಿರುತ್ತದೆ. ಚಿತ್ರ 1ರಲ್ಲಿ 2/3 X 4/7ತೋರಿಸಲಾಗಿದ್ದು ಬಣ್ಣ ಹಚ್ಚಿದ ಭಾಗವು 3X7 ಭಾಗಗಳಲ್ಲಿ 2 X 4   ಆಗಿರುತ್ತದೆ. ಅಂದರೆ 2×4/ 3×7. ಚಿತ್ರ 4 4/3 X 2/7 ಅನ್ನು ಪ್ರತಿನಿಧಿಸುತ್ತದೆ. ಇಲ್ಲಿ ಬಣ್ಣ ತುಂಬಿದ ಭಾಗವು 3X7 ನಲ್ಲಿ 4 X 2 ಇದೆ. 4×2/ 3×7.  ಲಂಬದ ಉದ್ದಕ್ಕೂ ತೋರಿಸಿರುವ  4/3 ಒಂದು ವಿಷಮ ಭಿನ್ನರಾಶಿ  ಆದ್ದರಿಂದ ಅದು ಒಂದು ಮಾನ ಚೌಕದ (ದಪ್ಪ ಗೆರೆಯಿಂದ ಸೂಚಿಸಿದೆ ) ಆಚೆಗೂ ಬಂದಿದೆ.

ಗುಣಾಕಾರದ ಪರಿವರ್ತನೀಯತೆಯ ಗುಣ

ಇಲ್ಲಿ 3 ಸಾಧ್ಯತೆಗಳಿವೆ:

1. ಸಮ X ಸಮ
2. ವಿಷಮ X  ಸಮ ( ಹಾಗು ∴ಸಮ X ವಿಷಮ )
3. ವಿಷಮ X ವಿಷಮ

1  ಮತ್ತು 2ರ ಒಂದೊಂದು ಉದಾಹರಣೆಗಳನ್ನು ಇಲ್ಲಿ ನೀಡುತ್ತೇವೆ.  ಹಾಗು 3 ನ್ನು ಅದೇ ರೀತಿಯಲ್ಲಿ ಮುಂದುವರೆಸಬಹುದು.

ಸಮ X ಸಮ

ಚಿತ್ರ 2ನ್ನು ಪಡೆಯಲು. ಚಿತ್ರ 1 ಅನ್ನು 90° ತಿರುಗಿಸಲಾಗುತ್ತದೆ.  ಚಿತ್ರ 1ರಲ್ಲಿ ಛಾಯೀಕರಿಸಿದ ಭಾಗವು 3 × 7ರಲ್ಲಿ  2 × 4 ಭಾಗಗಳು ಅಂದರೆ 2 × 4 / 3 × 7.

ಆದರೆ ಚಿತ್ರ 2ರಲ್ಲಿ  7 × *3*ರಲ್ಲಿ 4 × *2* ಭಾಗಗಳು ಅಂದರೆ 4 × *2* / 7 × *3* ಆಗುತ್ತದೆ.

ತಿರುಗಿಸಿರುವುದು ಒಂದು ಅನಮ್ಯ ಪರಿವರ್ತನೆಯಾಗಿದೆ. ಆದ್ದರಿಂದ ಉದ್ದ ಮತ್ತು ಅಗಲಗಳಲ್ಲಿ ಯಾವುದೇ ಬದಲಾವಣೆಗಳಿಲ್ಲ ಎಂಬುದನ್ನು ಗಮನಿಸಿ.  ಹಾಗಾಗಿ 2 × 4 / 3 × 7. = 4 × *2* / 7 × *3*..  ಅಂದರೆ ಇದನ್ನು ಯಾವುದೇ ಎರಡು ಸಮ ಭಿನ್ನರಾಶಿಗೆ ಸಾಮಾನ್ಯೀಕರಿಸಬಹುದು.

ಸಮ X ವಿಷಮ

ಹಿಂದಿನ ಉದಾಹರಣೆಯಲ್ಲಿನಂತೆಯೇ ಚಿತ್ರ 4ನ್ನು ಪಡೆಯಲು. ಚಿತ್ರ 3 ಅನ್ನು 90°ತಿರುಗಿಸಲಾಗುತ್ತದೆ.  ಹಾಗಾಗಿ ವಿಸ್ತೀರ್ಣವು ಬದಲಾಗುವುದಿಲ್ಲ. ಅಂದರೆ  2/7 X 4/3 =  4/3 X 2/7. ಚಿತ್ರ  3 ರಲ್ಲಿ ಗುಣಕವಾದ 4/3 ಒಂದು ವಿಷಮ ಭಿನ್ನರಾಶಿಯಾಗಿದೆ. ಆದ್ದರಿಂದ ಅಡ್ಡವಾಗಿ  ಛಾಯೀಕರಿಸಿದ ಭಾಗವು ಚದರಮಾನದ ಚೌಕದಿಂದಾಚೆಗೂ ಚಾಚಿಕೊಂಡಿದೆ. ಚಿತ್ರ 4 ರಲ್ಲಿ ಗುಣ್ಯವು ವಿಷಮ ಭಿನ್ನರಾಶಿಯಾಗಿದೆ. ಆದ್ದರಿಂದ ಲಂಬವಾಗಿ  ಛಾಯೀಕರಿಸಿದ ಭಾಗವು ಚದರಮಾನದ ಚೌಕದಿಂದಾಚೆಗೂ ಚಾಚಿಕೊಂಡಿದೆ.

ಈ ಮಾದರಿಯನ್ನು ಪೂರ್ಣಾಂಕ X ಭಿನ್ನರಾಶಿಯನ್ನು ಪ್ರತಿನಿಧಿಸಲೂ ಬಳಸಬಹುದಾಗಿದೆ. ಏಕೆಂದರೆ ಯಾವುದೇ ವಿಷಮ ಭಿನ್ನರಾಶಿಯು ಸ್ವಾಭಾವಿಕ ಸಂಖ್ಯೆ ಮತ್ತು ಸಮ ಭಿನ್ನರಾಶಿಯ ಮೊತ್ತವಾಗಿದೆ. ವ್ಯಾಖ್ಯೆಯ ಪ್ರಕಾರ 0 ಯನ್ನು ಒಳಗೊಂಡ ಗುಣಾಕಾರವು 0 ಯೇ ಆಗುತ್ತದೆ. ಆದ್ದರಿಂದ 0 ಯು ಇದ್ದಾಗ ಪರಿವರ್ತನೀಯ ಗುಣವು ತಾನಾಗಿಯೇ ನಿರೂಪಿತವಾಗುತ್ತದೆ.

<<<<< ಚಿತ್ರ 1, 2, 3 ಮತ್ತು 4 ನ್ನು ಸೇರಿಸಿ >>>>>>

ಗುಣಾಕಾರದ ವಿಭಾಜಕತೆಯ ಗುಣ

ಇಲ್ಲಿ 6 ಸಾಧ್ಯತೆಗಳಿವೆ:

1. ಸಮ X ( ಮೊತ್ತ
    a. ಸಮ X (ಸಮ + ಸಮ )
    b. ಸಮ X (ಸಮ + ವಿಷಮ)
    c. ಸಮ X (ವಿಷಮ + ವಿಷಮ) )
2. ವಿಷಮ X ( ಮೊತ್ತ
    a. ವಿಷಮ X (ಸಮ + ಸಮ )
    b. ವಿಷಮ X (ಸಮ + ವಿಷಮ)
    c. ವಿಷಮ X (ವಿಷಮ + ವಿಷಮ) )

ಸಮ + ವಿಷಮ = ವಿಷಮ + ಸಮ ಎಂದು ಹಿಂದಿನ ಲೇಖನದಲ್ಲಿ ಚರ್ಚಿಸಿದ ಸಂಕಲನ ಪರಿವರ್ತನೀಯತೆ ಗುಣವು ನಮಗೆ ತಿಳಿಸುತ್ತದೆ. 1a ಮತ್ತು 2b ಗಳ ಉದಾಹರಣೆಗಳನ್ನಷ್ಟೇ ನಾವಿಲ್ಲಿ ತೋರಿಸುತ್ತೇವೆ. ಓದುಗರು ಉಳಿದ ಸಾಧ್ಯತೆಗಳನ್ನು ಅನ್ವೇಷಿಸಬಹುದು.

ಸಮ X (ಸಮ + ಸಮ )

$\frac{3}{4} \times \left( \frac{4}{7} + \frac{2}{3} \right) = \frac{3}{4} \times \frac{4}{7} + \frac{3}{4} \times \frac{2}{3}$

ಎರಡೂ ಘನಗಳ ಛಾಯೀಕರಿಸಿದ ಅಡ್ಡ ಭಾಗಗಳ ಉದ್ದದ ಮೊತ್ತವು $4/7 + 2/3$ ನ್ನು ಪ್ರತಿನಿಧಿಸುತ್ತದೆ ಹಾಗು ಲಂಬದ ಉದ್ದವು $3/4$ ಇದೆ. ಹಾಗಾಗಿ ಒಟ್ಟು ಛಾಯೀಕರಿಸಿದ ಭಾಗವು $3/4 \times (4/7 + 2/3)$. ನಸುಗೆಂಪು ಬಣ್ಣದ ಭಾಗವು $3/4 \times 4/7$ ಅನ್ನು ಪ್ರತಿನಿಧಿಸಿದರೆ ಹಸಿರು ಬಣ್ಣದ ಭಾಗವು $3/4 \times 2/3$ ಅನ್ನು ಪ್ರತಿನಿಧಿಸುತ್ತದೆ. ಅಂದರೆ ಛಾಯೀಕರಿಸಿದ ಒಟ್ಟು ಭಾಗವು $3/4 \times 4/7 + 3/4 \times 2/3$. ಆದ್ದರಿಂದ $3/4 \times (4/7 + 2/3) = 3/4 \times 4/7 + 3/4 \times 2/3$.

ವಿಷಮ X (ಸಮ + ವಿಷಮ)

$\frac{5}{3} \times \left( \frac{2}{7} + \frac{7}{4} \right) = \frac{5}{3} \times \frac{2}{7} + \frac{5}{3} \times \frac{7}{4}$

ಚಿತ್ರ 11ರಲ್ಲಿನಂತೆಯೇ ಚಿತ್ರ 12ನ್ನೂ ಅರ್ಥ ಮಾಡಿಕೊಳ್ಳಬಹುದು. ವಿಷಮ ಭಿನ್ನರಾಶಿಯು ಇದ್ದಾಗ ಅದೇ ದಿಕ್ಕಿನಲ್ಲಿ ಮಾನ ಚದರವನ್ನು ಛಾಯೀಕರಿಸಿದ ಭಾಗವು ಮೀರುತ್ತದೆ ಎಂಬುದನ್ನು ಗಮನಿಸಿ. ಮೂರು ಭಿನ್ನರಾಶಿಗಳ ( ಹಾಗು ಸೊನ್ನೆಯೂ ಸೇರಿದಂತೆ ಸ್ವಾಭಾವಿಕ ಸಂಖ್ಯೆಗಳಿಗೆ ) ಯಾವುದೇ ಸಂಯೋಜನೆಗೆ ಇದು ದೃಶ್ಯಾತ್ಮಕವಾಗಿ ನಿರೂಪಿಸಿಕೊಳ್ಳಲು ಸಹಾಯವಾಗುತ್ತದೆ.

<<<<<<<<<<<< ಚಿತ್ರ 12 ನ್ನು ಸೇರಿಸಬೇಕು >>>>>>>>>

ಗುಣಾಕಾರದ ಸಹವರ್ತನೀಯತೆಯ ಗುಣ

ಗುಣಾಕಾರದ ಸಹವರ್ತನೀಯತೆಯ ಗುಣವು ಮೂರು ಭಿನ್ನರಾಶಿಗಳನ್ನು ಒಳಗೊಂಡಿರುತ್ತದೆ. ಹಾಗಾಗಿ ನಾವು ಘನಫಲ ಹಾಗು 3 ಆಯಾಮದ ಆಕೃತಿಗಳನ್ನು ಬಳಸಿಕೊಂಡು ಅಂದರೆ ಒಂದು ಘನಫಲವುಳ್ಳ ಘನವನ್ನು ಪೂರ್ಣದಂತೆ ಹಾಗೂ ಅದರ y, x ಮತ್ತು z ಅಕ್ಷಗಳು ಅನುಕ್ರಮವಾಗಿ ಮೂರು ಭಿನ್ನರಾಶಿಗಳಂತೆ ಪರಿಗಣಿಸೋಣ. ಇಲ್ಲಿ 8 ಸಾಧ್ಯತೆಗಳಿವೆ.

1. ಮೂರೂ ಸಮ ಭಿನ್ನರಾಶಿಗಳು
2. ಎರಡು ಸಮ ಮತ್ತು ಒಂದು ವಿಷಮ
    a. ಸಮ X ಸಮ X ವಿಷಮ
    b. ಸಮ X ವಿಷಮ X ಸಮ
    c. ವಿಷಮ X ಸಮ X ಸಮ
3. ಒಂದು ಸಮ ಮತ್ತು ಎರಡು ವಿಷಮ
    a. ಸಮ X ವಿಷಮ X ವಿಷಮ
    b. ವಿಷಮ X ಸಮ X ವಿಷಮ
    c. ವಿಷಮ X ವಿಷಮ X ಸಮ
4. ಎಲ್ಲವೂ ವಿಷಮ ಭಿನ್ನರಾಶಿಗಳು

2c ಅನ್ನು ಒಂದು ಉದಾಹರಣೆಯಾಗಿ ಇಲ್ಲಿ ತೋರಿಸಲಾಗಿದ್ದು, ಉಳಿದದ್ದನ್ನು ಅದೇ ರೀತಿಯಲ್ಲಿ ಮಾಡಬಹುದು. 3 ಆಯಾಮದ ಮೂಲಕ ಇದನ್ನು ಹಂತ ಹಂತವಾಗಿ ತೋರಿಸಲಾಗಿದೆ.

ಉದಾಹರಣೆಯಾಗಿ $(4/3 \times 5/9) \times 1/2 = 4/3 \times (5/9 \times 1/2)$ ಅನ್ನು ತೆಗೆದುಕೊಂಡಿದ್ದೇವೆ. ಸ್ಪಷ್ಟವಾಗಿ ಕಾಣಿಸಲೆಂದು ಎರಡು ಘನಗಳ ನಡುವೆ ಜಾಗ ಬಿಡಲಾಗಿದೆಯಾದರೂ ಅದು ಇರಬೇಕಾಗಿಲ್ಲ. ಎರಡೂ ಪ್ರಕ್ರಿಯೆಗೂ ಕೊನೆಯಲ್ಲಿ ಬರುವ ಘನಫಲವು ಒಂದೇ ಆಗಿದೆ ಎನ್ನುವುದನ್ನು ಗಮನಿಸಿ. ಇದನ್ನು ಯಾವುದೇ ಮೂರು ಭಿನ್ನರಾಶಿಗಳಿಗೆ ( ಹಾಗೂ ಸ್ವಾಭಾವಿಕ ಸಂಖ್ಯೆಗಳಿಗೆ) ಸಾಮಾನ್ಯೀಕರಿಸಬಹುದು.

ಸ್ವಾತಿ ಸರ್ಕಾರ್ ಅವರು ರಚಿಸಿರುವ ಈ ಭಿತ್ತಿಪತ್ರವು ದೃಶ್ಯದ ಮೂಲಕ ಸಮರ್ಥನೆ ನೀಡುತ್ತದೆ. ಇದನ್ನು ಔಪಚಾರಿಕ ಸಾಧನೆಯ ಜೊತೆ ಸಮೀಕರಿಸಲಾಗುವುದಿಲ್ಲ. ಇದು ಪದ್ಮಪ್ರಿಯ ಶಿರಾಲಿಯವರು ರಚಿಸಿದ – ಗುಣಾಕಾರ (ಸಂಪುಟ 3, ಸಂಚಿಕೆ 1) ಮತ್ತು ಭಿನ್ನರಾಶಿ (ಸಂಪುಟ 1, ಸಂಚಿಕೆ 1) ಪುರವಣಿಗಳು ಹಾಗು ಶೈಲಜಾ ಡಿ

ಶರ್ಮ ಅವರು ರಚಿಸಿದ (ಸಂಪುಟ 7, ಸಂಚಿಕೆ 2) ಪುರವಣಿಯ ಭಿನ್ನರಾಶಿಯ ಗುಣಾಕಾರದ ದೃಶ್ಯ ಮಾದರಿಯನ್ನು ಆಧರಿಸಿದೆ.